RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಡಿಸೆಂಬರ್ ೨೬, ೨೦೧೩ (ಪುಷ್ಯ ೫, ಶಕ ವರ್ಷ ೧೯೩೫)<br>Bangalore, Thursday, December 26, 2013 (Pushya 5, Shaka Varsha 1935) | ಸಂಚಿಕೆ ೫೧<br>Issue 51 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ :** ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 205.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006, ದಿನಾಂಕ: 20–4–2006.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006, ದಿನಾಂಕ: 19–12–2006.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011, ದಿನಾಂಕ: 28–10–2011.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2012, ದಿನಾಂಕ: 11–10–2012.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/VWILLP-(204 to 205.6 MW)2013/1616, ದಿನಾಂಕ 08/12–03–2013.
6. ದಿನಾಂಕ 11–3–2013 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ Logaer Machines (I) Ltd. ಕಂಪನಿಯ ಹೆಸರನ್ನು ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ॥ Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

| Sl. No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates:-<br>**Latitude :** $15^{0}$ 1'55"8'0"N<br>**Longitude :** $75^{0}$08'56" – $75^{0}$14'23"E<br>**Ridge peaks :** 701, 714, 682, 717, 713, 698, 733 722m AMSL. | 79.20 | 0 | 79.20 MW<br>(99 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli.- Karadgi, Nelgudda etc., and the area is covered in the following Geographical co-oridinates :-<br>**Latitude :** $15^{0}$0'0" $15^{0}$10'30"N<br>**Longitude :** $75^{0}$15'0" – $75^{0}$28'19"E<br>**Ridge peaks :** 681, 671, 676, 638, 624, 698, 664, 611, 644, 701, 720, 663, 682, 664, 708, 665, 664m AMSL. | 120.80 | 4 | 124.80 MW<br>(156 x 80 KW) |
| **TOTAL** | | **200** | **4** | **204 MW (255 x 800 KW)** |

ಮೇಲೆ ಓದಲಾದ (5) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಗಳ ಶಿಗ್ಗಾಂವ್ ಮತ್ತು ಕುಂದಗೋಳ ತಾಲ್ಲೂಕುಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 205.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವಂತೆ ಅಭಿವೃದ್ಧಿದಾರರು ಡಿಪಿಆರ್‌ನೊಂದಿಗೆ ಸಲ್ಲಿಸಿದ್ದ ಪ್ರಸ್ತಾವನೆಯನ್ನು ಪರಿಶೀಲಿಸಿ, ಈಗಾಗಲೇ ಮಂಜೂರಾಗಿರುವ ಸ್ಥಳದಲ್ಲಿಯೇ ಸದರಿ ಸಾಮರ್ಥ್ಯವನ್ನು ಹೆಚ್ಚಿಸುವ ಕುರಿತಂತೆ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಹಾಗೂ ಯೋಜನಾ ಪ್ರದೇಶವು ಖಾಸಗಿ ಜಮೀನಾಗಿದ್ದು, ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್/ಪಿಪಿಎ/ಆರ್‌ಇಸಿ Mechanism ರಡಿಯಲ್ಲಿ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವುದರ ಮೂಲಕ ವಿದ್ಯುತ್ ಸರಬರಾಜು ಮಾಡಲಾಗುವುದೆಂದು ಮತ್ತು ಈ ಯೋಜನೆಯನ್ನು ದಿನಾಂಕ 31–3–2014 ರೊಳಗಾಗಿ ಅನುಷ್ಠಾನಗೊಳಿಸಲಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಓದಲಾದ (5) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಇವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಗಳ ಶಿಗ್ಗಾಂವ್ ಮತ್ತು ಕುಂದಗೋಳ ತಾಲ್ಲೂಕುಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 205.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಲು ಸಮಿತಿಯು ಶಿಫಾರಸ್ಸಿಸಿರುತ್ತದೆ.

ಆದುದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 107 ಎನ್‌ಸಿಇ 2013, ಬೆಂಗಳೂರು, ದಿನಾಂಕ: 16–05–2013**

ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಗಳ ಶಿಗ್ಗಾಂವ್ ಮತ್ತು ಕುಂದಗೋಳ ತಾಲ್ಲೂಕುಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 205.6 ಮೆ.ವ್ಯಾ. ಸಾಮರ್ಥ್ಯಕ್ಕೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ಹೆಚ್ಚಿಸಿ ಆದೇಶಿಸಿದೆ.

| Sl. No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates:-<br>**Latitude :** $15^0$ 1' 55"$15^0$8'0"N<br>**Longitude :** $75^0$08'56" – $75^0$14'23"E<br>**Ridge peaks :** 701, 714, 682, 717, 713, 698, 733 722m AMSL. | 79.20 | 1.60 | 80.80 MW<br>(101 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli.- Karadgi, Nelgudda etc., and the area is covered in the following Geographical co-oridinates :-<br>**Latitude :** $15^0$0'0" $15^0$10'30"N<br>**Longitude :** $75^0$15'0" – $75^0$28'19"E<br>**Ridge peaks :** 681, 671, 676, 638, 624, 698, 664, 611, 644, 701, 720, 663, 682, 664, 708, 665, 664m AMSL. | 124.80 | 0 | 124.80 MW<br>(156 x 800 KW) |
| **TOTAL** | | **204** | **1.6** | **205.60 MW (257 x 800 KW)** |

1. ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06–1–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ರವರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
3. ಸದರಿ ಯೋಜನೆಯನ್ನು ದಿನಾಂಕ 31–3–2014 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
4. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**P.R. 1018**
**SC - 25**

## ಇಂಧನ ಸಚಿವಾಲಯ

**ವಿಷಯ :** ಮೆ॥ Pioneer Genco Ltd. ಕಂಪನಿಯವರಿಗೆ ಹಂಚಿಕೆಯಾಗಿರುವ 15.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 217 ಎನ್‌ಸಿಇ 2005, ದಿನಾಂಕ: 18–8–2005.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-212/Bazara MHS/2012/2626, ದಿನಾಂಕ 05/06–10–2012.
3. ಕಾರಣ ಕೇಳುವ ನೋಟಿಸ್ ದಿನಾಂಕ: 13–11–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ॥ Pioneer Genco Ltd. ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಬಜಾರ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ 15.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ Pioneer Genco Ltd. ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಬಜಾರ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 15.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಧಿಸಿರುವ ಪ್ರಗತಿಯ ಬಗ್ಗೆ ಮಾಹಿತಿಯನ್ನು ನೀಡಲು ಕೋರಿದ್ದು, ಇದುವರೆಗೂ ಸಾಧಿಸಿರುವ ಪ್ರಗತಿಯ ಬಗ್ಗೆ ಮಾಹಿತಿಯನ್ನು ನೀಡಿರುವುದಿಲ್ಲ ಹಾಗೂ ಯೋಜನೆಯನ್ನು ಅನುಷ್ಠಾನಗೊಳಿಸಲು ಆಸಕ್ತಿ ಇಲ್ಲದಿರುವುದು ಕಂಡು ಬಂದಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಯೋಜನೆಯನ್ನು ರದ್ದುಗೊಳಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟಿಸ್‌ನಲ್ಲಿ ಮೇಲ್ಕಂಡ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಾಜಾಯಿಷಿ ನೀಡುವಂತೆ ಕಾರಣ ಕೇಳುವ ನೋಟಿಸನ್ನು ಮೆ॥ Pioneer Genco Ltd. ರವರಿಗೆ ಜಾರಿಗೊಳಿಸಲಾಗಿತ್ತು. ಸದರಿ ನೋಟಿಸ್ಸಿಗೆ ಅಭಿವೃದ್ಧಿದಾರರು ಉತ್ತರಿಸಿರುವುದಿಲ್ಲ. ಆದ್ದರಿಂದ, ದಿನಾಂಕ 18–1–2013ರ ಪತ್ರದಲ್ಲಿ ಮತ್ತೊಮ್ಮೆ ಅಭಿವೃದ್ಧಿದಾರರಿಗೆ ದಿನಾಂಕ 13.11.2012ರ ಕಾರಣ ಕೇಳುವ ನೋಟಿಸ್‌ಗೆ 7 ದಿನಗಳೊಳಗಾಗಿ ಉತ್ತರಿಸುವಂತೆ ಸೂಚಿಸಲಾಗಿತ್ತು. ಆದರೆ, ಅಭಿವೃದ್ಧಿದಾರರು ಯಾವುದೇ ಉತ್ತರವನ್ನು ಇದುವರೆವಿಗೂ ನೀಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2012, ಬೆಂಗಳೂರು, ದಿನಾಂಕ: 04–03–2013.**

ಮೆ॥ Pioneer Genco Ltd. ಇವರಿಗೆ ಸರ್ಕಾರಿ ಆದೇಶ ಸಂಖ್ಯೆ ಇಎನ್ 217 ಎನ್‌ಸಿಇ 2005 ದಿನಾಂಕ 18–8–2005 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಬಜಾರ ಗ್ರಾಮದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 15.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆಯನ್ನು ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**P.R. 1002**
**SC - 25**

## ಇಂಧನ ಸಚಿವಾಲಯ

**ವಿಷಯ :** ಮೆ॥ ಗ್ರ್ಯಾಂಡ್ ವಿಲ್ಲೆ ಎನರ್ಜಿ ಪ್ರೈ. ಲಿ. ಇವರಿಗೆ 3 ಮೆ.ವ್ಯಾ. ಸಾಮರ್ಥ್ಯದ ಎಣ್ಣೆಹೊಳೆ ಕೊಪ್ಪಲು ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-703/Yenehole Koppalu-SHP/2011/947 Dt. 16/22-03-2011, ಕೆಆರ್‌ಇಡಿ /06/SH-703/Yenehole Koppalu-SHP/2011/1432 Dt. 18/20-05-2011 ಮತ್ತು ಕೆಆರ್‌ಇಡಿ /06/SH-703/Yenehole Koppalu-SHP/2012/260 Dt. 02-02-2013.
2. ದಿನಾಂಕ 27–05–2011 ರಂದು ನಡೆದ ಹಂಚಿಕೆ ಸಮಿತಿ ಸಭೆ ನಡವಳಿ.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಗ್ರ್ಯಾಂಡ್ ವಿಲ್ಲೆ ಎನರ್ಜಿ ಪ್ರೈ. ಲಿ. ಇವರು ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಎಣ್ಣೆಹೊಳೆ ಕೊಪ್ಪಲು ಗ್ರಾಮದ ಪ್ರದೇಶದಲ್ಲಿ, ಕಾವೇರಿ ನದಿಯ ಎಡದಂಡೆಗೆ ಅಡ್ಡಲಾಗಿ 3 ಮೆ.ವ್ಯಾ. ಸಾಮರ್ಥ್ಯದ 'ಎಣ್ಣೆಹೊಳೆ ಕೊಪ್ಪಲು' ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆಗಾಗಿ ದಿನಾಂಕ 16/22–03–2011 ರಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಗ್ರ್ಯಾಂಡ್ ವಿಲ್ಲೆ ಎನರ್ಜಿ ಪ್ರೈ. ಲಿ. ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಎಣ್ಣೆಹೊಳೆ ಕೊಪ್ಪಲು ಗ್ರಾಮ ಪ್ರದೇಶದಲ್ಲಿ, ಕಾವೇರಿ ನದಿಯ ಎಡದಂಡೆಗೆ

ಅಡ್ಡಲಾಗಿ 3 ಮೆ.ವ್ಯಾ. ಸಾಮರ್ಥ್ಯದ 'ಎಣ್ಣೆಹೊಳೆ ಕೊಪ್ಪಲು' ಕಿರು ಜಲ ವಿದ್ಯುತ್ ಯೋಜನೆಯನ್ನು ಸಂಬಂಧಿಸಿದ ಪಿಸಿಸಿಎಫ್, ವನ್ಯಜೀವಿ ಇವರ ಅಭಿಪ್ರಾಯ ಪಡೆಯುವ ಷರತ್ತಿಗೊಳಪಟ್ಟು ಸ್ಥಾಪಿಸಲು ಅನುಮತಿ ನೀಡಲು ಹಂಚಿಕೆ ಸಮಿತಿಯು ಶಿಫಾರಸ್ಸಿಸಿರುತ್ತದೆ.

ಮೆ॥ ಗ್ರ್ಯಾಂಡ್ ವಿಲ್ಲೆ ಎನರ್ಜಿ ಪ್ರೈ. ಲಿ. ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಎಣ್ಣೆಹೊಳೆ ಕೊಪ್ಪಲು ಗ್ರಾಮ ಪ್ರದೇಶದಲ್ಲಿ, ಕಾವೇರಿ ನದಿಯ ಎಡದಂಡೆಗೆ ಅಡ್ಡಲಾಗಿ 3 ಮೆ.ವ್ಯಾ. ಸಾಮರ್ಥ್ಯದ 'ಎಣ್ಣೆಹೊಳೆ ಕೊಪ್ಪಲು' ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಉದ್ದೇಶಿಸಿರುವ ಯೋಜನೆಯು ಈಗಾಗಲೇ ಹಂಚಿಕೆಯಾಗಿರುವ ತಮ್ಮ 0.5 ಮೆ.ವ್ಯಾ. ಸಾಮರ್ಥ್ಯದ ಸೀತಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಅತಿಕ್ರಮಿಸುವುದಾಗಿ (Overlap) ಮೆ॥ ಪರ್ಷಿಕಲಾ ಪವರ್ ಪ್ರೈ. ಲಿ. ರವರು ಆಕ್ಷೇಪಿಸಿರುವುದರ ಹಿನ್ನೆಲೆಯಲ್ಲಿ ಸರ್ಕಾರದ ದಿನಾಂಕ 01–08–2011 ರ ಪತ್ರದನ್ವಯ ಯೋಜನೆಯ ಸ್ಥಳ ಪರಿವೀಕ್ಷಿಸಿ ವಿವರವಾದ ವರದಿಯನ್ನು ನೀಡುವಂತೆ ಕೋರಲಾಗಿತ್ತು.

ಕ್ರೆಡಲ್ ರವರ ದಿನಾಂಕ 02–02–2013ರ ಪತ್ರದಲ್ಲಿ ಮೆ॥ ಪರ್ಷಿಕಲಾ ಪವರ್ ಪ್ರೈ. ಲಿ. ಇವರ ಕಂಪನಿಗೆ ಹಂಚಿಕೆಯಾಗಿರುವ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯ ಹೆಚ್ಚಿಸುವ ಕೋರಿಕೆಯನ್ನು ಪರಿಗಣಿಸಿದ್ದಲ್ಲಿ, ಸದರಿ ಯೋಜನೆಯು ಅತಿಕ್ರಮಿಸುವುದೆಂದು ವರದಿ ನೀಡಿರುತ್ತಾರೆ. ಆದರೆ ಮೆ॥ ಪರ್ಷಿಕಲಾ ಪವರ್ ಪ್ರೈ. ಲಿ. ಇವರಿಗೆ ಸರ್ಕಾರದ ಆದೇಶ ಸಂಖ್ಯೆ : ಡಿಇ 130 ಎನ್‌ಸಿಇ 2001 (2) ದಿನಾಂಕ 03–11–2001 ರಲ್ಲಿ 0.5 ಮೆ.ವ್ಯಾ. ಸಾಮರ್ಥ್ಯದ ಸೀತಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿದ್ದು, ಸದರಿಯವರು ಯೋಜನಾ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ತೋರಿಸದ ಹಿನ್ನೆಲೆಯಲ್ಲಿ ಸದರಿಯವರು ಸಾಮರ್ಥ್ಯ ಹೆಚ್ಚಳ ಕೋರಿಕೆಯನ್ನು ಸರ್ಕಾರದ ಆದೇಶ ಸಂಖ್ಯೆ : ಇಎನ್ 258 ಎನ್‌ಸಿಇ 2006, ದಿನಾಂಕ 04–12–2009 ರಲ್ಲಿ ತಿರಸ್ಕರಿಸಲಾಗಿದೆ. ಆದ್ದರಿಂದ ಮೆ॥ ಗ್ರ್ಯಾಂಡ್ ವಿಲ್ಲೆ ಎನರ್ಜಿ ಪ್ರೈ. ಲಿ. ಇವರಿಗೆ ಯೋಜನೆಯನ್ನು ಹಂಚಿಕೆ ಮಾಡುವ ಕುರಿತಂತೆ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 184 ಎನ್‌ಸಿಇ 2011, ಬೆಂಗಳೂರು, ದಿನಾಂಕ: 07–03–2013.**

ಮೆ॥ ಗ್ರ್ಯಾಂಡ್ ವಿಲ್ಲೆ ಎನರ್ಜಿ ಪ್ರೈ. ಲಿ. ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಎಣ್ಣೆಹೊಳೆ ಕೊಪ್ಪಲು ಗ್ರಾಮ ಪ್ರದೇಶದಲ್ಲಿ, ಕಾವೇರಿ ನದಿಯ ಎಡದಂಡೆಗೆ ಅಡ್ಡಲಾಗಿ 3 ಮೆ.ವ್ಯಾ. ಸಾಮರ್ಥ್ಯದ 'ಎಣ್ಣೆಹೊಳೆ ಕೊಪ್ಪಲು' ಕಿರು ಜಲ ವಿದ್ಯುತ್ ಯೋಜನೆಯನ್ನು Weir Latitude 12°25'39"/Longitude 76°36'38", Power House Latitude 12°25'30"/Longitude 76°37'56" ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. ಈ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ : ಇಎನ್ 07 ಎನ್‌ಸಿಇ 2011 ದಿನಾಂಕ 17–08–2011ರ ತಿದ್ದುಪಡಿ ಆದೇಶದಲ್ಲಿ ನೀಡಿರುವ ಕಾಲಾವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.

2. ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

3. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 435 ಎನ್‌ಸಿಇ 2011 ದಿನಾಂಕ 06–1–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ಸರ್ಕಾರದಿಂದ ಅನುಮೋದಿತವಾದ ಕರಾರು ಪತ್ರದನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

4. ಯೋಜನೆಗೆ ಸಂಬಂಧಿಸಿದಂತೆ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ಕ್ರೆಡಲ್ ಸಂಸ್ಥೆಗೆ ಯೋಜನಾ ವರದಿ ಪರಿಷ್ಕರಣಾ ಶುಲ್ಕವನ್ನು ತುಂಬುವುದು.

5. ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

6. ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

7. ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಅಥವಾ ಮೂರನೇ ವ್ಯಕ್ತಿಯೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಮಾಡಿಕೊಳ್ಳತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಅಥವಾ ಸರ್ಕಾರದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12. ಸದರಿ ಯೋಜನೆಗೆ ಪಿಸಿಸಿಎಫ್ ವನ್ಯಜೀವಿ ಇವರ ಅನುಮತಿ ಪಡೆಯತಕ್ಕದ್ದು.

13. ಸರ್ಕಾರಿ ಆದೇಶ ಸಂಖ್ಯೆ : ಇಎನ್ 95 ಇವಿಎಸ್ 2009, ದಿನಾಂಕ 29–12–2009 ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

14. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ ಮಾಡದ ಹೊರತು ವರ್ಗಾವಣೆ ಮತ್ತು ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

15. ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**P.R. 1004**
**SC - 25**

## ಇಂಧನ ಸಚಿವಾಲಯ

**ವಿಷಯ :** ಮೆ॥ ಶಿವ ವೆಂಚರ್ಸ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 18 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಬಿಇಎಮ್‌ಎಲ್ ಲಿಮಿಟೆಡ್ ಕಂಪನಿಯವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 434 ಎನ್‌ಸಿಇ 2010, ದಿನಾಂಕ: 19–4–2011.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/BEML-18 MW-SIVA/2012/427, ದಿನಾಂಕ: 19–02–2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ॥ ಶಿವ ವೆಂಚರ್ಸ್ ಲಿಮಿಟೆಡ್ ರವರಿಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಮಿಟಲ್ಕೋಡ್ ಮತ್ತು ತುಗ್ಗಲದೋಣಿ ಗ್ರಾಮಗಳಲ್ಲಿ ಮತ್ತು ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ದಮ್ಮೂರು ಗ್ರಾಮಗಳ ಆಸುಪಾಸಿನಲ್ಲಿ 18 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಶಿವ ವೆಂಚರ್ಸ್ ಲಿಮಿಟೆಡ್ ರವರಿಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಮಿಟಲ್ಕೋಡ್ ಮತ್ತು ತುಗ್ಗಲದೋಣಿ ಗ್ರಾಮಗಳಲ್ಲಿ ಮತ್ತು ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ದಮ್ಮೂರು ಗ್ರಾಮಗಳ ಆಸುಪಾಸಿನಲ್ಲಿ ಹಂಚಿಕೆಯಾಗಿರುವ 18 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಬಿಇಎಮ್‌ಎಲ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸುವ ಕುರಿತಂತೆ ಈ ವರ್ಗಾವಣೆ ಪ್ರಸ್ತಾವನೆಗೆ ಎರಡು ಕಂಪನಿಗಳು ಪರಸ್ಪರ ಒಪ್ಪಿರುವುದಾಗಿ, ಯೋಜನೆಯನ್ನು ಖಾಸಗಿ ಪ್ರದೇಶದಲ್ಲಿ ಅನುಷ್ಠಾನಗೊಳಿಸುತ್ತಿದ್ದು, ಯೋಜನೆಯಿಂದ ಉತ್ಪಾದನೆಯಾಗುವ ವಿದ್ಯುತ್‌ನ್ನು ಮೆ॥ ಬಿಇಎಮ್‌ಎಲ್ ಲಿಮಿಟೆಡ್ ಕಂಪನಿಯವರು ಸ್ವಂತಕ್ಕಾಗಿ ಬಳಕೆ ಮಾಡಿಕೊಳ್ಳುವುದಾಗಿ ತಿಳಿಸುತ್ತಾ, ವರ್ಗಾವಣೆ ಪ್ರಸ್ತಾವನೆಯನ್ನು ಅನುಮೋದಿಸಬಹುದೆಂಬ ಅಭಿಪ್ರಾಯದೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 76 ಎನ್‌ಸಿಇ 2013, ಬೆಂಗಳೂರು, ದಿನಾಂಕ: 10–06–2013.**

ಮೆ॥ ಶಿವ ವೆಂಚರ್ಸ್ ಲಿಮಿಟೆಡ್ ರವರಿಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಮಿಟಲ್ಕೋಡ್ ಮತ್ತು ತುಗ್ಗಲದೋಣಿ ಗ್ರಾಮಗಳಲ್ಲಿ ಮತ್ತು ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ದಮ್ಮೂರು ಗ್ರಾಮಗಳ ಆಸುಪಾಸಿನಲ್ಲಿ ಹಂಚಿಕೆಯಾಗಿರುವ 18 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಬಿಇಎಮ್‌ಎಲ್ ಲಿಮಿಟೆಡ್ ಕಂಪನಿಯವರಿಗೆ ಈ ಕೆಳಗಿನ ಷಡ್ಯೂಲ್‌ನಲ್ಲಿ ವಿವರಿಸಿದಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮೋದನೆ ನೀಡಲಾಗಿದೆ :–

**Geographical area description for 18 MW Wind Power Project**

| Capacity in MW | Villages/Taluk/ District | Description of area |
|---|---|---|
| 18.00 MW | Mittalkod and Tuggaladoni in Kustagi Taluk, Koppal District | Two areas are proposed for development of 18 MW and are designated as Location – A & Location – B and detailed as below : |

| Capacity in MW | Villages/Taluk/ District | Description of area |
|---|---|---|
| | Dammur in Hunagund taluk, Bagalkot District | **Location A :** The proposed area is situated in an independent hillock located on the South of gudur village. The area is a large plateau and has elevation of 705m amsl. The total description of the location as per toposheet in Doni Reserve Forest and fairly dense scrub. But, the actual project area ownership vests with private and has been possessed by applicant as detailed in Schedule-II. The location is held in the following geographical co-oridnates :<br>Latitude : 15°54'26' – 15°54'54" N<br>Longitude : 75°53'53' – 75°54'33" E<br>Ridge Peaks : 705 m Amsl<br>**Location B :** This area is situated in the non-contiguous high rised plateaus and located on the South-East of gudur village and South-West of Dammur village. The area is described as open scrub, stony waste and has presence of sheet rocks. As per toposheet, it is situated in the Reserved Forest. But, the actual project area ownership vests with private and has been possessed by applicant as detaile in scheduled-II. The proposed area is covered in following geographical co-ordinates :<br>Latitude : 15°54'49' – 15°55'18" N<br>Longitude : 75°56'53' – 75°57'43" E<br>Ridge Peaks : 692 m Amsl Toposheet 48 M/13 |

**LAND DETAILS FOR 18 MW WIND POWER PROJECTS**

| Village Name | Taluk/ District | MW | Land Survey number | No. of WTG's | WTG location No | Latitude and Longitude |
|---|---|---|---|---|---|---|
| Tugaldoni | Kushtagi, Koppal | 1.00 | 52 | 1 | HAM-1 | Lat : 15°54'34.79"<br>Long : 75°53'57.31 |
| Mitalkod | Kushtagi, Koppal | 1.00 | 79 | 1 | HAM-2 | Lat : 15°54'43.21"<br>Long : 75°53'53.24 |
| Tugaldoni | Kushtagi, Koppal | 1.00 | 53 | 1 | HAM-3 | Lat : 15°54'34.75"<br>Long : 75°54'14.83 |
| Tugaldoni | Kushtagi, Koppal | 1.00 | 53 | 1 | HAM-4 | Lat : 15°54'40.36"<br>Long : 5°54'11.461 |
| Mitalkod | Kushtagi, Koppal | 1.00 | 78/1 | 1 | HAM-5 | Lat : 15°54'45.97"<br>Long : 75°54'08.09 |
| Mitalkod | Kushtagi, Koppal | 1.00 | 75 | 1 | HAM-6 | Lat : 15°54'51.58"<br>Long : 75°54'04.72 |
| Mitalkod | Kushtagi, Koppal | 1.00 | 76 | 1 | HAM-7 | Lat : 15°54'53.19"<br>Long : 75°54'01.38 |

| Village Name | Taluk/ District | MW | Land Survey number | No. of WTG's | WTG location No | Latitude and Longitude |
|---|---|---|---|---|---|---|
| Mitalkod | Kushtagi, Koppal | 1.00 | 74 | 1 | HAM-8 | Lat : 15°54'54.91" Long : 75°54'17.58 |
| Mitalkod | Kushtagi, Koppal | 1.00 | 73 | 1 | HAM-9 | Lat : 15°54'46.39" Long : 75°54'25.41 |
| Dammur | Hunagund, Bagalkot | 1.00 | 2 | 1 | HAM-10 | Lat : 15°55'15.55" Long : 75°56'55.67 |
| Dammur | Hunagund, Bagalkot | 1.00 | 2 | 1 | HAM-11 | Lat : 15°55'07.97" Long : 75°56'55.70 |
| Dammur | Hunagund, Bagalkot | 1.00 | 3/2 & 3/1 | 1 | HAM-12 | Lat : 15°55'03.14" Long : 75°57'05.73 |
| Dammur | Hunagund, Bagalkot | 1.00 | 4,6,10 | 1 | HAM-13 | Lat : 15°55'11.39" Long : 75°57'09.27 |
| Dammur | Hunagund, Bagalkot | 1.00 | 11 | 1 | HAM-14 | Lat : 15°55'15.54" Long : 75°57'26.64 |
| Dammur | Hunagund, Bagalkot | 1.00 | 7 | 1 | HAM-15 | Lat : 15°55'06.61" Long : 75°57'22.93 |
| Dammur | Hunagund, Bagalkot | 1.00 | 7 | 1 | HAM-16 | Lat : 15°54'55.06" Long : 75°57'21.87 |
| Dammur | Hunagund, Bagalkot | 1.00 | 12/1 | 1 | HAM-17 | Lat : 15°55'01.80" Long : 75°57'37.37 |
| Dammur | Hunagund, Bagalkot | 1.00 | 12/2,3,8 | 1 | HAM-18 | Lat : 15°55'11.42" Long : 75°57'38.66 |
| | | **18.00** | | | | |

1. ಸದರಿ ಯೋಜನೆಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
2. ಈ ಯೋಜನೆಯಿಂದ ಉತ್ಪಾದನೆಯಾಗುವ ವಿದ್ಯುತ್‌ನ್ನು ಮೆ॥ ಬಿಇಎಮ್‌ಎಲ್ ಲಿಮಿಟೆಡ್ ಕಂಪನಿಯು ತನ್ನ ಸ್ವಂತ ಬಳಕೆಗಾಗಿ ಉಪಯೋಗಿಸಿಕೊಳ್ಳಲು ಅನುಮತಿಸಿದೆ.
3. ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**P.R. 1030**

**SC - 25**